# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುಲ್ಲದ ಪ್ರಶ್ನೆ ಸಂಖ್ಯೆ :831

ಮಾನ್ಯ ವಿಧಾನ ಪರಿಷತ್ಸದಸ್ಯರಹೆಸರು : ಶ್ರೀ. ಎಸ್.ಎಲ್.ಭೋಜೇಗೌಡ

ಉತ್ತರಿಸುವ ದಿನಾಂಕ : 15.12.2020.

ಉತ್ತರಿಸುವ ಸಚಿವರು : ಪೌರಾಡಳಿತ ,ತೋಟಗಾರಿಕೆ & ರೇಷ್ಮೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ದಿನಾಂಕ; 03-09-2020ರಂದು ನಡೆದ ಇಲಾಖೆ ಮುಂಬಡ್ತಿ ಸಭೆಯಲ್ಲಿ 54 ಅಧಿಕಾರಿಗಳಿಗೆ ಶಿಫಾರಸ್ಸು ಮಾಡಿ ಅದರದಲ್ಲಿ 22 ಅಧಿಕಾರಿಗಳಿಗೆ ಮಾತ್ರ ಮುಂಬಡ್ತಿ ನೀಡಲಾಗಿದ್ದು. ಉಳಿದ ಅಧಿಕಾರಿಗಳ ಮುಂಬಡ್ತಿ ನೀಡದಿರಲು ಕಾರಣವೇನು; (ವಿವರ ನೀಡುವುದು) | ಸರ್ಕಾರಿ ಆದೇಶ ಸಂ: ತೋಇ 299 ತೋಇವಿ 2018 ದಿನಾಂಕ:29-11-2018ರ ಆದೇಶದಲ್ಲಿ 287 ಸಹಾಯಕ ತೋಟಗಾರಿಕೆ ಅಧಿಕಾರಿ ವೃಂದದ ಹುದ್ದೆಗಳನ್ನು ಸಹಾಯಕ ತೋಟಗಾರಿಕೆ ನಿರ್ದೇಶಕರು ಹುದ್ದೆಗೆ ಉನ್ನತೀಕರಿಸಲಾಗಿರುತ್ತದೆ. ಇದರಲ್ಲಿ 251 ಹುದ್ದೆಗಳು ರಾಜ್ಯ ಉಳಿಕೆ ಮೂಲ ವೃಂದದ ಹುದ್ದೆಗಳಾಗಿರುತ್ತವೆ. ಇದರಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳ ಅನ್ವಯ ಶೇ.90 ರಷ್ಟು ಸಹಾಯಕ ತೋಟಗಾರಿಕೆ ನಿರ್ದೇಶಕರು ವೃಂದದಡಿ ಬಡ್ತಿಗೆ ಅಂದರೆ 226 ಹಾಗೂ ಶೇ.10ರಷ್ಟು ನೇರನೇಮಕಾತಿ ಅಂದರೆ 25 ಹುದ್ದೆಗಳು ಲಭ್ಯವಾಗಿರುತ್ತದೆ. ಬಡ್ತಿಗೆ ಲಭ್ಯವಾಗುವ 226 ಹುದ್ದೆಗಳಿಗೆ ಸ್ಥಾನಪನ್ನ ಬಡ್ತಿ ನೀಡಲು ಪರಿಶೀಲಿಸಿತು. ಬಡ್ತಿಗೆ ಪ್ರಸ್ತಾಪಿಸಿರುವ ಅರ್ಹ ಸಹಾಯಕ ತೋಟಗಾರಿಕೆ ಅಧಿಕಾರಿ/ ಸ್ವತಂತ್ರ ಪ್ರಭಾರೆ ಸಹಾಯಕ ತೋಟಗಾರಿಕೆ ನಿರ್ದೇಶಕರುಗಳ ಸಿಆಸುಇ, ದಿನಾಂಕ:09-10-1985ರ ಸುತ್ತೋಲೆಯನ್ವಯ ಖಾಲಿ ಹುದ್ದೆಗಳಿಗೆ ಅನುಗುಣವಾಗಿ ಹಾಗೂ ಹೆಚ್ಚುವರಿಯಾಗಿ ಶೇ 25% ರಷ್ಟು ಹುದ್ದೆಗಳಿಗೆ ಅಂದರೆ ಈ ಪ್ರಕರಣದಲ್ಲಿ 54 ಸಹಾಯಕ ತೋಟಗಾರಿಕೆ ಅಧಿಕಾರಿಗಳನ್ನು ಸಹಾಯಕ ತೋಟಗಾರಿಕೆ ನಿರ್ದೇಶಕರ ಹುದ್ದೆಗೆ ಬಡ್ತಿಗೆ ಪರಿಗಣಿಸಿ **ದಿನಾಂಕ:03.09-2019ರಂದು DPC** ಸಭೆ ನಡೆಸಲಾಗಿತ್ತು. ನಂತರ ಕಾಲ ಕಾಲಕ್ಕೆ ಬಡ್ತಿ ಗೆ ಉದ್ಭವಿಸಿದ ಹುದ್ದೆಗಳನ್ನು ಪರಿಗಣಿಸಿ ದಿನಾಂಕ:9.7.2020 ರಂದು ಬಡ್ತಿಗೆ ಲಭ್ಯವಾದ 22 ಹುದ್ದೆಗಳಿಗೆ ಮಾತ್ರ ಸಹಾಯಕ ತೋಟಗಾರಿಕೆ ಅಧಿಕಾರಿ ಹುದ್ದೆಯಿಂದ ಸಹಾಯಕ ತೋಟಾರಿಕೆ ನಿರ್ದೇಶಕರ ವೃಂದಕ್ಕೆ ಬಡ್ತಿ ನೀಡಲಾಗಿರುತ್ತದೆ. ಉಳಿದ ಅಧಿಕಾರಿಗಳಿಗೆ ಬಡ್ತಿ ಕೋಟಾದಲ್ಲಿ ಹುದ್ದೆಗಳು ಲಭ್ಯವಾದ ನಂತರ ಬಡ್ತಿ ನೀಡಲು ಕ್ರಮವಹಿಸಲಾಗುವುದು. |

| | | |
|---|---|---|
| (ಆ) | ಪ್ರಸ್ತುತ ಇಲಾಖೆಯಲ್ಲಿ ಖಾಲಿ ಇರುವ ಸಹಾಯಕ ತೋಟಗಾರಿಕೆ ನಿರ್ದೇಶಕರ ಹುದ್ದೆಗಳ ಸಂಖ್ಯೆ ಎಷ್ಟು: ಇದರಲ್ಲಿ ನೇರ ನೇಮಕಾತಿ ಮತ್ತು ಮುಂಬಡ್ತಿ ನೀಡಲು ನಿಗಧಿಪಡಿಸಿದ ಹುದ್ದೆಗಳ ವಿವರ ನೀಡುವುವುದು: | ತೋಟಗಾರಿಕೆ ಇಲಾಖೆಯಲ್ಲಿ ಖಾಲಿ ಇರುವ ಸಹಾಯಕ ತೋಟಗಾರಿಕೆ ನಿರ್ದೇಶಕರ ಹುದ್ದೆಗಳ ಒಟ್ಟು **ಸಂಖ್ಯೆ:87** ಇದರಲ್ಲಿ **ನೇರ ನೇಮಕಾತಿಗೆ 85** ಹುದ್ದೆಗಳು ಹಾಗೂ **ಮುಂಬಡ್ತಿಗೆ 02** ಹುದ್ದೆಗಳನ್ನು ನಿಗಧಿಪಡಿಸಿದೆ. |
| (ಇ) | ತೋಟಗಾರಿಕೆ ಸಹಾಯಕರ ಹುದ್ದೆಗಳನ್ನು ರೈತ ಸಂಪರ್ಕ ಕೇಂದ್ರಗಳ ಅಡಿಯಲ್ಲಿ ನಿಯೋಜಿಸದೇ ತಾಲ್ಲೂಕು ಕಛೇರಿ ಅಧೀನದಡಿ ನಿಯೋಜಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? ಇದರಿಂದ ರೈತ ಸಂಪರ್ಕ ಕೇಂದ್ರದಲ್ಲಿರುವ ಸಹಾಯಕ ತೋಟಗಾರಿಕೆ ಅಧಿಕಾರಿಗೆ ಹೋಬಳಿ ವ್ಯಾಪ್ತಿಯಲ್ಲಿ ಕರ್ತವ್ಯ ನಿರ್ವಹಿಸಲು ಕಷ್ಟಸಾಧ್ಯವಾಗಿರುವುದು ಸರ್ಕಾರದ ಗಮದಲ್ಲಿದೆಯೇ: | ಹೌದು, ರೈತ ಸಂಪರ್ಕ ಕೇಂದ್ರಗಳಲ್ಲಿ ಸಹಾಯಕ ತೋಟಗಾರಿಕೆ ಅಧಿಕಾರಿಗಳ ಹುದ್ದೆಗಳು ಮಾತ್ರ ಮಂಜೂರಾಗಿದ್ದು, ತೋಟಗಾರಿಕೆ ಸಹಾಯಕರ ಹುದ್ದೆಗಳು ಮಂಜೂರಾಗಿರುವುದಿಲ್ಲ.ರೈತ ಸಂಪರ್ಕ ಕೇಂದ್ರಗಳಲ್ಲಿ ಸಹಾಯಕ ತೋಟಗಾರಿಕೆ ಅಧಿಕಾರಿಗಳ ಕರ್ತವ್ಯ ನಿರ್ವಹಣೆಯಲ್ಲಿ ಅಡಚಣೆ / ಸಮಸ್ಯೆ ಉಂಟಾಗಿರುವ ಕುರಿತಾಗಿ ಯಾವುದೇ ವರದಿಯಾಗಿರುವುದಿಲ್ಲ. |
| (ಈ) | ಎಸ್.ಎಸ್.ಎಲ್.ಸಿ /ಪಿ.ಯು.ಸಿ ಮತ್ತು 10 ತಿಂಗಳ ತೋಟಗಾರಿಕೆ ಡಿಪ್ಲೋಮೋ /ತರಬೇತಿ ಪಡೆದು ನೇಮಕಗೊಂಡಿರುವ ತೋಟಗಾರಿಕೆ ಸಹಾಯಕರಿಗೆ ನೇರವಾಗಿ ಸಹಾಯಕ ತೋಟಗಾರಿಕೆ ಅಧಿಕಾರಿ "ಬಿ" ವೃಂದದ ಹುದ್ದೆಗೆ ಮುಂಬಡ್ತಿ ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಯಾವ ಆಧಾರದ ಮೇಲೆ ತಾಂತ್ರಿಕ ಹುದ್ದೆಗೆ ಬಡ್ತಿ ನೀಡಲಾಗುತ್ತಿದೆ; ಇದರಿಂದ ತೋಟಗಾರಿಕೆ ವಿಶ್ವವಿದ್ಯಾಲಯದಲ್ಲಿರುವ B.sc. /Msc ಪಡೆದ ವಿದ್ಯಾರ್ಥಿಗಳಿಗೆ ಅನ್ಯಾಯವಾಗುವುದಿಲ್ಲವೇ? | ಹೌದು. ಪ್ರಸ್ತುತ ಚಾಲ್ತಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಶೇ.10 ರಷ್ಟು ತೋಟಗಾರಿಕೆ ಸಹಾಯಕ ವೃಂದದಿಂದ ಸಹಾಯಕ ತೋಟಗಾರಿಕೆ ಅಧಿಕಾರಿ ವೃಂದಕ್ಕೆ ವೃಂದಕ್ಕೆ ಬಡ್ತಿ ನೀಡಲು ಅವಕಾಶ ಕಲ್ಪಿಸಲಾಗಿರುತ್ತದೆ. ಅದರಂತೆ ಬಡ್ತಿ ನೀಡಲಾಗಿರುತ್ತದೆ. ವೃಂದ ಮತ್ತು ನೇಮಕಾತಿ ನಿಯಮಗಳನ್ವಯವೇ ಬಡ್ತಿಗೆ ಕ್ರಮವಹಿಸಿರುವುದರಿಂದ, ಹಾಗೂ ಶೇ.90 ರಷ್ಟು ಹುದ್ದೆಯನ್ನು ತೋಟಗಾರಿಕೆ ವಿಶ್ವವಿದ್ಯಾಲಯದಲ್ಲಿ B.sc. /Msc ಪಡೆದ ವಿದ್ಯಾರ್ಥಿಗಳಿಗೆ ನೇರ ನೇಮಕಾತಿ ಗೆ ಮೀಸಲಿಡಲಾಗಿರುತ್ತದೆ. ಆದಕಾರಣ ಯಾವುದೇ ಅನ್ಯಾಯವಾಗುವ ಪ್ರಶ್ನೆಉದ್ಭವಿಸುವುದಿಲ್ಲ. |

ಸಂ: HORTI/ 517/HGM/2020-admn-Horti-Sec

(ನಾರಾಯಣಗೌಡ)

ಪೌರಾಡಳಿತ, ತೋಟಗಾರಿಕೆ

ಮತ್ತು ರೇಷ್ಮೆ ಸಚಿವರು